ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಕೊಡಗು ಜಿಲ್ಲೆಯಲ್ಲಿ ಹಾಳಾಗಿರುವ ಕಾಫಿ ಬೆಳೆಯ ಬಗ್ಗೆ ಕೇಂದ್ರ ಸರ್ಕಾರಕ್ಕೆ ವರದಿ ಸಲ್ಲಿಸುವ ಕುರಿತು

ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) :-

979(1068) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಳೆದ 3 ವರ್ಷಗಳಿಂದ ಸತತವಾಗಿ ಬೆಳೆ ಹಾಳಾಗಿರುವುದರಿಂದ, ಸಂಕಷ್ಟದಲ್ಲಿರುವ ಕೊಡಗು ಜಿಲ್ಲೆಯ ಕಾಫಿ ಬೆಳೆಗಾರರಿಗೆ ಅನುಕೂಲವಾಗುವಂತಹ ಹಾಗೂ ಕಾಫಿ ಬೆಳೆ ಪುನಶ್ಚೇತನಕ್ಕೆ ಪೂರಕವಾದಂತಹ ಯೋಜನೆಯನ್ನು ರೂಪಿಸಲಾಗಿದೆಯೇ ;

(ಆ) ಕೊಡಗು ಜಿಲ್ಲೆಯ ಕಾಫಿ ಬೆಳೆಗಾರರು ಕಳೆದ 3 ವರ್ಷಗಳಿಂದ ಸತತವಾಗಿ ನಷ್ಟ ಅನುಭವಿಸುತ್ತಿರುವುದರ ಕುರಿತು ಕೇಂದ್ರ ಸರ್ಕಾರಕ್ಕೆ ಪರಿಣಾಮಕಾರಿಯಾದ ವರದಿಯನ್ನು ಸಲ್ಲಿಸಲಾಗಿದೆಯೇ ;

(ಇ) ಸಲ್ಲಿಸಿದ್ದಲ್ಲಿ, ಜಿಲ್ಲೆಯಲ್ಲಿನ ಕಾಫಿ ಬೆಳೆಗಾರರಿಗೆ ಸತತವಾಗಿ ಆಗಿರುವ ನಷ್ಟದ ಅಂದಾಜನ್ನು ನಿಖರ ಅಂಕಿ-ಅಂಶಗಳೊಂದಿಗೆ ಕೇಂದ್ರ ಸರ್ಕಾರಕ್ಕೆ ಮನದಟ್ಟು ಮಾಡಿಕೊಡಲಾಗಿದೆಯೇ ;

(ಈ) ಮಾಡಿಕೊಟ್ಟಿದ್ದಲ್ಲಿ, ಆಗಿರುವ ನಷ್ಟದ ಅಂದಾಜನ್ನು ಸರಿದೂಗಿಸಲು ಬೇಕಾದ ಅನುದಾನವನ್ನು ಕೇಂದ್ರ ಸರ್ಕಾರದಿಂದ ಪಡೆಯಲಾಗಿದೆಯೇ?